# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 212 |
| ಸದಸ್ಯರ ಹೆಸರು | ಶ್ರೀ ಅರವಿಂದ ಕುಮಾರ್ ಅರಳಿ |
| ಉತ್ತರಿಸುವ ದಿನಾಂಕ | 02/02/2021 |
| ಉತ್ತರಿಸುವವರು | ತೋಟಗಾರಿಕೆ ಮತ್ತು ರೇಷ್ಮೆ ಸಚಿವರು |

| | ಪ್ರಶ್ನೆಗಳು | ಉತ್ತರ |
|---|---|---|
| ಅ | ಬೀದರ್ ಜಿಲ್ಲೆಯ ರೇಷ್ಮೆ ಇಲಾಖೆಯಲ್ಲಿ ಒಟ್ಟು 53 ಹುದ್ದೆಗಳು (ಹೊಸ ತಾಲ್ಲೂಕು ಸೇರಿ) ಖಾಲಿ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಅವುಗಳನ್ನು ಭರ್ತಿ ಮಾಡುವುದು ಯಾವಾಗ? | ಬಂದಿದೆ,<br><br>ಬೀದರ್ ಜಿಲ್ಲೆಯಲ್ಲಿ ರೇಷ್ಮೆ ಇಲಾಖೆಯಲ್ಲಿ ಕೆಳಕಂಡಂತೆ ಒಟ್ಟು 57 ಹುದ್ದೆಗಳು ಖಾಲಿ ಇರುತ್ತದೆ.<br><br>ಕೇಡರ್ \| ಮಂಜೂರಾದ ಹುದ್ದೆಗಳು \| ಭರ್ತಿಯಾದ ಹುದ್ದೆಗಳು \| ಖಾಲಿಯಿರುವ ಹುದ್ದೆಗಳು<br>ಎ \| 1 \| 1 \| 0<br>ಬಿ \| 6 \| 1 \| 5<br>ಸಿ \| 67 \| 21 \| 46<br>ಡಿ \| 9 \| 3 \| 6<br>**ಒಟ್ಟು** \| **83** \| **26** \| **57**<br><br>ಬೀದರ್ ಜಿಲ್ಲೆಯೂ ಸೇರಿದಂತೆ ಇಲಾಖೆಯಲ್ಲಿ ಖಾಲಿಯಿರುವ ಹುದ್ದೆಗಳ ಪೈಕಿ ನಿರೀಕ್ಷಕರು (Sericulture Inspector) , ರೇಷ್ಮೆ ಪ್ರದರ್ಶಕರು(Sericulture Demonstrator) ಹಾಗೂ ರೇಷ್ಮೆ ಪ್ರವರ್ತಕರ (Sericulture Operative) ಒಟ್ಟು 733 ಹುದ್ದೆಗಳನ್ನು ಭರ್ತಿ ಮಾಡುವ ಪ್ರಕ್ರಿಯೆಯಲ್ಲಿರುತ್ತದೆ. |
| ಆ | ಬೀದರ್ ಜಿಲ್ಲೆಯಲ್ಲಿ ರೇಷ್ಮೆ ಉತ್ಪಾದನೆಗೆ ಫಲವತ್ತಾದ ವಾತಾವರಣವಿದ್ದು ಹೆಚ್ಚಿನ ಗಮನವಹಿಸುವುದು ಅವಶ್ಯಕತೆ ಇರುವುದರಿಂದ ಇಲ್ಲಿ ರೇಷ್ಮೆ ಅಭಿವೃದ್ಧಿಗಾಗಿ ರೇಷ್ಮೆ ಸಂಶೋಧನಾ ಕೇಂದ್ರ ಅಭಿವೃದ್ಧಿಗೊಳಿಸುವ ಬಗ್ಗೆ ಸರ್ಕಾರದ ಯೋಜನೆ ಇದೆಯೇ; ಇದ್ದಲ್ಲಿ ಯಾವಾಗ; ಇಲ್ಲದಿದ್ದರೆ ಕಾರಣವೇನು? | ಬೀದರ್ ಜಿಲ್ಲೆಯಲ್ಲಿ ರೇಷ್ಮೆ ಅಭಿವೃದ್ಧಿಗಾಗಿ ರೇಷ್ಮೆ ಸಂಶೋಧನಾ ಕೇಂದ್ರ ಪ್ರಾರಂಭಿಸುವ ಯೋಜನೆ ಸರ್ಕಾರದ ಮುಂದಿರುವುದಿಲ್ಲ.<br>ಮುಂದುವರೆದು, ರಾಜ್ಯದಲ್ಲಿ ನಿರ್ದಿಷ್ಟ ಭೂ ಹವಾಮಾನ ವಲಯಗಳಲ್ಲಿ ತಾಂತ್ರಿಕತೆಗಳಿಗೆ ಸಂಬಂದಪಟ್ಟ ಸಮಸ್ಯೆಗಳನ್ನು ಪರಿಹರಿಸಲು ಕರ್ನಾಟಕ ರಾಜ್ಯ ರೇಷ್ಮೆ ಸಂಶೋಧನೆ ಮತ್ತು ಅಭಿವೃದ್ಧಿ ಸಂಸ್ಥೆ, ತಲಘಟ್ಟಪುರ, (KSSRDI) ಬೆಂಗಳೂರಿನಲ್ಲಿ ಸಂಶೋಧನ ಕಾರ್ಯಗಳನ್ನು ನಿರ್ವಹಿಸುತ್ತಿರುವ ಜೊತೆಗೆ ಇದರ ಉಪಕೇಂದ್ರಗಳು ಬಿ.ಆರ್.ಹಿಲ್ಸ್(ಚಾಮರಾಜನಗರ) /ತೀರ್ಥಹಳ್ಳಿ (ಮೇಲಿನಕುರವಳ್ಳಿ) / ಬಿಡದಿ / ಊಟಿಯಲ್ಲಿ ಸಂಶೋಧನಾ ಕಾರ್ಯಗಳನ್ನು ನಿರ್ವಹಿಸುತ್ತಿವೆ.<br>ಕೇಂದ್ರ ರೇಷ್ಮೆ ಮಂಡಳಿಯ, ಕೇಂದ್ರ ರೇಷ್ಮೆ ಸಂಶೋಧನೆ ಮತ್ತು ತರಬೇತಿ ಸಂಸ್ಥೆ, (CSR&TI) ಮೈಸೂರು, ಕೇಂದ್ರಿಯ ರೇಷ್ಮೆ ತಾಂತ್ರಿಕ ಸಂಶೋದನಾ ಸಂಸ್ಥೆ, ಮಡಿವಾಳ (CSTRI), ಬೆಂಗಳೂರು ಹಾಗೂ ಇದರ ಸಂಶೋದನಾ ವಿಸ್ತರಣಾ ಕೇಂದ್ರಗಳು ಕೊಪ್ಪಳ /ಚಿತ್ರದುರ್ಗ/ಚಾಮರಾಜನಗರ ಇಲ್ಲಿ ಸಂಶೋಧನಾ ಕಾರ್ಯಗಳನ್ನು ನಿರ್ವಹಿಸುತ್ತಿವೆ.<br>ರೇಷ್ಮೆ ಬೀಜೋತ್ಪಾದನೆ ಹಾಗೂ ತಾಂತ್ರಿಕತೆ ಪ್ರಯೋಗಾಲಯ (SSTL), ಕೊಡತಿ, ಬೆಂಗಳೂರು ಸಂಸ್ಥೆಯಲ್ಲಿ ರೇಷ್ಮೆ ಬಿಜೋತ್ಪದನೆ ಅಭಿವೃದ್ಧಿಗಾಗಿ ಸಂಶೋಧನಾ ಕಾರ್ಯವನ್ನು ಕೈಗೊಳ್ಳುತ್ತಿದೆ. |

| | | |
|---|---|---|
| | | ಈ ಸಂಸ್ಥೆಗಳು ಹೊರತರುವ ತಾಂತ್ರಿಕತೆಗಳನ್ನು ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ರೇಷ್ಮೆ ಇಲಾಖೆಯ ವಿಸ್ತರಣಾ ಸಿಬಂಬ್ಬಂದಿಗಳು ವಿಸ್ತರಣಾ ಕಾರ್ಯಕ್ರಮಗಳನ್ನು ಹಾಗೂ ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಕ್ಷೇತ್ರಮಟ್ಟಕ್ಕೆ ತಲುಪಿಸುತ್ತಿದ್ದಾರೆ. |

**ಸಂಖ್ಯೆ: ರೇಷ್ಮೆ 24 ರೇಕೃವಿ 2021**

**(ಆರ್.ಶಂಕರ್)**
**ತೋಟಗಾರಿಕೆ ಮತ್ತು ರೇಷ್ಮೆ ಸಚಿವರು**